# ಭಾಷಾ ಕಲಿಕೆಯ ವಿಭಿನ್ನ ಅಗತ್ಯತೆಗಳನ್ನು ಹೊಂದಿರುವ ಮಕ್ಕಳಿಗೆ ಬಹುಮುಖ ಸಾಮರ್ಥ್ಯದ ಸಮನ್ವಯ ತರಗತಿ ಕೋಣೆಗಳು

**Inclusive Classrooms for Children with Different Language Learning Needs**

– ಸೋನಾಲಿ ನಾಗ್

ಭಾಷಾ ಕಲಿಕೆಯ ಪ್ರಕ್ರಿಯೆಯು ಅನೇಕ ಪದಗಳನ್ನು ಹೊಂದಿರುವ ಒಂದು ದೀರ್ಘ ವಾಕ್ಯದ ಹಾಗೆ ಇದೆ ಎಂದು ಕಲ್ಪಿಸಿಕೊಳ್ಳಿ. ಈ ವಾಕ್ಯದಲ್ಲಿನ ಕೆಲವು ಪದಗಳನ್ನು ಯಾವುದೋ ಒಂದು ಕಾಣದ ಕೈ ಬದಲಾಯಿಸುತ್ತದೆ ಅಥವಾ ಅಳಿಸಿಹಾಕುತ್ತದೆ ಎಂಬಂತೆ ಊಹಿಸಿಕೊಳ್ಳಿ. ಅಂತಹ ಪ್ರತಿಯೊಂದು ಹಸ್ತಕ್ಷೇಪವು ವಾಕ್ಯವನ್ನು ಸೂಕ್ಷ್ಮ ರೀತಿಯಲ್ಲಿ ಬದಲಾಯಿಸುತ್ತದೆ. ಆದರೆ ಕೆಲವು ರೀತಿಯ ಬದಲಾವಣೆಗಳು ಇತರ ಬದಲಾವಣೆಗಳಿಗಿಂತ ಅರ್ಥದಲ್ಲಿ ದೊಡ್ಡ ಪಲ್ಲಟವನ್ನು ಉಂಟುಮಾಡುತ್ತವೆ. ''**need**' ಪದದ ಬದಲಾಗಿ 'deed' ಅನ್ನು ಅಥವಾ 'rhyme'' ಪದದ ಬದಲಾಗಿ 'rote' ಅನ್ನು ಬಳಸುವುರಿಂದ ಆಗುವ ಪರಿಣಾಮಕ್ಕಿಂತ 'and' ಅಥವಾ 'or' ಎಂಬ ಪದಗಳನ್ನು ಕೈಬಿಡುವುದರಿಂದ ವಾಕ್ಯದ ಅರ್ಥದ ಮೇಲೆ ಮಹತ್ತರ ಪರಿಣಾಮವನ್ನುಂಟು ಮಾಡುತ್ತದೆ. ಈಗ ಈ ಪ್ರತಿಯೊಂದು ಬದಲಾವಣೆಗಳಿಂದ ಶರೀರದ ವಂಶವಾಹಿಗಳು ಮತ್ತು ಮೆದುಳಿನ ಕಾರ್ಯವಿಧಾನಗಳು, ಭಾಷಾ ಕಲಿಕೆಯ ಪ್ರಕ್ರಿಯೆಯನ್ನು ಅಡ್ಡಿಪಡಿಸಲಾರಂಭಿಸುತ್ತವೆ ಎಂದು ಕಲ್ಪಿಸಿಕೊಳ್ಳಿ. ಭಾಷೆಯ ಬೆಳವಣಿಗೆಯ ಮೇಲಿನ ಪ್ರಭಾವಗಳು ವಿಭಿನ್ನ ಬಗೆಯದ್ದಾಗಿರುತ್ತವೆ: ಕೆಲವು ಅಡಚಣೆಗಳು ಚಿಕ್ಕದಾಗಿರುತ್ತವೆ ಮತ್ತು ಸುಲಭವಾಗಿ ಸರಿಪಡಿಸುವಂತಹವಾಗಿದ್ದರೆ ಇತರ ಅಡಚಣೆಗಳು ಭಾಷಾ ಕಲಿಕೆಯಲ್ಲಿ ದೊಡ್ಡ ಅಂತರವನ್ನು ತಂದುಬಿಡುವಂತಹವಾಗಿರುತ್ತವೆ. ಈ ಅಂತರ ಅಥವಾ ಕೊರತೆ ಮಗುವಿನ ಶಾಲಾ ದಿನಗಳ ನಂತರವೂ ಮಗುವಿನೊಂದಿಗೇ ಉಳಿದುಬಿಡುತ್ತದೆ. ಜೈವಿಕ ರಚನೆಗಳು ನಂತರದ ಭ್ಲಾಷಾ ಬಳಕೆಯನ್ನು, ನಂತರದ ಕೌಶಲ್ಯ ಮತ್ತು ಪ್ರತಿಭೆಯ ಮಾರ್ಗಗಳನ್ನು ಆಳವಾಗಿ ರೂಪಿಸುತ್ತವೆ.

ಆದರೆ ಭಾಷಾ ಕಲಿಕೆಯ ಪ್ರಕ್ರಿಯೆಯನ್ನು ರೂಪಿಸುವ ಕಾಣದ ಕೈಗಳೆಂದರೆ ಅದು ಜೀವಶಾಸ್ತ್ರ ಮತ್ತು ಅಂತರ್ಗತ ಸಾಮರ್ಥ್ಯಗಳು ಮಾತ್ರವೇ ಅಲ್ಲ. ಭಾಷಾ ಕಲಿಕೆಯ ಪ್ರಕ್ರಿಯೆಯಲ್ಲಿರುವ ಹಸ್ತಕ್ಷೇಪಗಳನ್ನು ಮತ್ತೊಮ್ಮೆ ಊಹಿಸಿಕೊಳ್ಳಿ. ಈ ಬಾರಿ ಆ ಹಸ್ತಕ್ಷೇಪವು ನಾವು ನಮ್ಮ ಮಕ್ಕಳಿಗೆ ಕಲಿಸಲು ಬಳಸುವ ವಿಧಾನಗಳಿಂದ ಸಂಭವಿಸುತ್ತದೆ ಎಂಬಂತೆ ಊಹಿಸಿ. ಬೋಧನೆಯಲ್ಲಿ ಕೆಲವು ಲೋಪಗಳಿದ್ದು ಅವುಗಳನ್ನು ಇತರ ಸಹಜ ಸ್ವಾಭಾವಿಕ, ಪ್ರಾಯಶಃ ಸಹ–ಪ್ರಾಸಂಗಿಕ, ಅನುಭವಗಳಿಂದ ಕೂಡ ನಿವಾರಿಸಬಹುದು. ಆದಾಗ್ಯೂ, ಕೆಲವು ಮೊದಲೇ ಯೋಜಿಸಲ್ಪಟ್ಟ ಪ್ರೋಗ್ರಾಮ್ ಮಾಡಲಾದ ಭಾಷಾ ಬೋಧನಾ ವಿಧಾನಗಳು, ಅವುಗಳು ಕಲಿಕೆಯ ಪ್ರಕ್ರಿಯೆಯೊಂದಿಗೆ ಮುಖಾಮುಖಿಯಾಗುವ ಬಗೆಯಲ್ಲಿ ವಿಧದಲ್ಲಿ, ದೂರಗಾಮಿ ಪರಿಣಾಮಗಳನ್ನು . ಉಂಟು ಮಾಡುತ್ತವೆ. ಅಜಾಗರೂಕತೆಯಿಂದ ಪರಿಗಣಿಸಲಾದ ವಾಕ್ಯವು ಯಾವ ಗತಿಯನ್ನು ಹೊಂದುತ್ತದೆಯೋ ಹಾಗೆಯೇ, ಬೋಧನೆಯಲ್ಲಿನ ಕೆಲವು ಲೋಪಗಳು ಅರ್ಥ ಮತ್ತು ಉದ್ದೇಶವನ್ನು ಸ್ವಲ್ಪಮಟ್ಟಿಗೆ ಬದಲಾಯಿಸಬಹುದು. ಆದರೆ ಇತರ ಹಸ್ತಕ್ಷೇಪಗಳು ಗಾಢವಾಗಿ ವಿನಾಶಕಾರಿಯಾಗಬಹುದು. ಮಗುವಿನ ಸಂಪೂರ್ಣ ಭಾಷಾ ಸಾಮರ್ಥ್ಯದ ಅಭಿವ್ಯಕ್ತಿಯನ್ನು ಭಾಷಾ ಕಲಿಕೆಯ ಪ್ರತಿ ಹಂತದಲ್ಲೂ ಅಳವಡಿಸಿಕೊಂಡ ಪಠ್ಯಕ್ರಮವೂ ಪ್ರಭಾವಿಸುತ್ತದೆ.

ಇದು ಸ್ವಾಭಾವಿಕತೆ ಮತ್ತು ಪೋಷಣೆಯ ನಡುವಿನ ಅತಿ ಹಳೆಯ ಗುದ್ದಾಟವಾಗಿದೆ: ಇದು ಮಗುವಿನ ಕಲಿಕೆಯ ಸಾಮರ್ಥ್ಯ ಮತ್ತು ಆ ಸಾಮರ್ಥ್ಯದ ಅಭಿವ್ಯಕ್ತಿಗಾಗಿ ರಚಿಸಲಾದ ಅವಕಾಗಳ ನಡುವಿನ ಗುದ್ದಾಟವಾಗಿದೆ. ಆದಾಗ್ಯೂ, ಬಹುತೇಕ ಖಚಿತವಾಗಿ ತೋರುತ್ತಿರುವುದು ಏನೆಂದರೆ, ಭಾಷಾ ಬೋಧನೆಯ ಕೆಲವು ವಿಧಾನಗಳು ಮಕ್ಕಳ ಭಾಷಾ ಕಲಿಕೆಯನ್ನು ಇನ್ನೂ ಮೇಲಿನ ಮಟ್ಟದ ಉನ್ನತ ಮಟ್ಟದ ಅತ್ಯಾಧುನಿಕತೆತೆ ಮತ್ತು ಪ್ರಾವೀಣ್ಯದತ್ತ ಒಯ್ಯಬಹುದು. ವಿಶೇಷ ಶೈಕ್ಷಣಿಕ ಅಗತ್ಯತೆಗಳನ್ನು ಹೊಂದಿರುವ ಮಕ್ಕಳ ವಿಷಯದಲ್ಲೂ ಇದು ಸತ್ಯವೆಂದು ದಶಕಗಳ 'ಮಧ್ಯಸ್ಥಿಕೆ ಸಂಶೋಧನೆ'ಯು (ಇಂಟರ್‌ವೆನ್ಷನ್ ರಿಸರ್ಚ್) ತೋರಿಸುತ್ತದೆ. ಪ್ರಾಥಮಿಕ ಹಂತದಲ್ಲಿ, ಸಮನ್ವಯ ಬಹುಮುಖಿ ಸಾಮರ್ಥ್ಯದ (ಇನ್‌ಕ್ಲೂಸಿವ್) ಭಾಷಾ ಕಲಿಕೆಯ ವಾತಾವರಣವು ಅಂತಹ ವಾತಾವರಣವನು ಕಲ್ಪಿಸುತ್ತದೆ. ಸಮನ್ವಯ ಬಹುಮುಖೀ ಸಾಮರ್ಥ್ಯದ ಕಲಿಕಾ ವಾತಾವರಣ ಎಂದರೆ ಏನೆಂದು ನಾನು ಭಾವಿಸಿರುವೆನೋ ಅದನ್ನು ವ್ಯಾಖ್ಯಾನಿಸುತ್ತೇನೆ. ಆದರೆ ಮೊದಲಿಗೆ, ವಿಶೇಷ ಅಗತ್ಯವಿರುವ ಮಕ್ಕಳು ಎಂದರೆ ಯಾರು?

## ಶೈಕ್ಷಣಿಕ ಅಗತ್ಯಗಳ ವಿವಿಧ ರೂಪಗಳು

ಭಾಷೆ, ಕಲಿಕೆ ಮತ್ತು ಅರಿವಿನ ಸಂಜ್ಞಾನಾತ್ಮಕ ಬೆಳವಣಿಗೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಹೊಂದಿರುವ ಮಕ್ಕಳು ಬಹುಶಃ ತರಗತಿಯಲ್ಲಿ ವಿಶೇಷ ಅಗತ್ಯಗಳನ್ನು ಹೊಂದಿರುವ ಮಕ್ಕಳಾಗಿದ್ದಾರೆ ಎಂದು ಸುಲಭವಾಗಿ ಗುರುತಿಸಲಾಗುತ್ತದೆ. ಅವರು ಹೊಂದಿರುವ ಸಮಸ್ಯೆಗಳನ್ನು ಅವಲಂಬಿಸಿ, ಅವರು ಡಿಸ್ಲೆಕ್ಸಿಯಾ, ನಿರ್ದಿಷ್ಟ ಭಾಷಾ ದುರ್ಬಲತೆ (ಸ್ಪೆಸಿಫಿಕ್ ಲ್ಯಾಂಗ್ವೇಜ್ ಇಂಪೇರ್‌ಮೆಂಟ್), ಅಟೆನ್ಶನ್ ಡಿಫಿಸಿಟ್ ಡಿಸಾರ್ಡರ್, ಡೌನ್ಸ್ ಸಿಂಡ್ರೋಮ್ ಅಥವಾ ಆಟಿಸಂ ಸ್ಪೆಕ್ಟ್ರಮ್ ಡಿಸಾರ್ಡರ್‌ಗಳನ್ನು ಹೊಂದಿದ್ದಾರೆ ಎಂದು ನಿರ್ಣಯಿಸಬಹುದು ಅವರಲ್ಲಿ ಕೆಲವರಿಗೆ ಸರಳ ಓದುವಿಕೆ ಮತ್ತು ಕಾಗುಣಿತಗಳೂ ಕಷ್ಟವಾಗಬಹುದು. ಇತರೆ ಕೆಲವರಿಗೆ, ಸಂಕೀರ್ಣವಾದ ಅಥವಾ ಆಳವಾದ, ಯಾವುದೇ ಮಟ್ಟದ ಲಿಖಿತ ಪದದೊಂದಿಗೆ ಸಂಕೀರ್ಣವಾದ ಅಥವಾ ಆಳವಾದ, ಯಾವುದೇ ಮಟ್ಟದಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗದಿರಬಹುದು. ಹಲವಾರು ವೈದ್ಯಕೀಯ ಸಮಸ್ಯೆಗಳು ಸಹ ಭಾಷಾ ಕಲಿಕೆಯ ಪ್ರಕ್ರಿಯೆಗೆ ಅಡ್ಡಿಯಾಗಬಹುದು. ಉದಾಹರಣೆಗೆ, ಎಪಿಲೆಪ್ಸಿ, ನ್ಯೂರೋಫೈಬ್ರೋಮಾಟೋಸಿಸ್ ಮತ್ತು ಮೆನಿಂಜೈಟಿಸ್‌ನಂತಹ ಸಮಸ್ಯೆಗಳು ಸಣ್ಣ ಭಾಷಾ ವಿವರಗಳನ್ನು ಗ್ರಹಿಸುವಲ್ಲಿ ಮಕ್ಕಳಿಗೆ ಸವಾಲುಗಳನ್ನು ಒಡ್ಡಬಹುದು. ಕ್ಷೀಣದೃಷ್ಟಿ ಮತ್ತು ವಾಹಕ ಶ್ರವಣ ನಷ್ಟದ ಸಂವೇದನಾ ದುರ್ಬಲತೆಗಳು ಸಹ ಇಲ್ಲಿ ಸಮಸ್ಯೆಗಳನ್ನು ಒಡ್ಡಬಹುದು. ಮತ್ತು ಅಂತಿಮವಾಗಿ, ತಮ್ಮ ಸಾಮಾಜಿಕ-ಭಾವನಾತ್ಮಕ ಜೀವನದಲ್ಲಿ ಹೋರಾಟ ನಡೆಸುತ್ತಿರುವ ಮಕ್ಕಳಿಗೆ ಭಾಷಾ ಕಲಿಕೆಯ ಸಂವಹನ ಮತ್ತು ಸಂವಾದಾತ್ಮಕ ಅಂಶಗಳೊಂದಿಗೆ ತೊಡಗಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಮೇಲೆ ನೀಡಲಾದ ಪಟ್ಟಿಯು ಸಮಗ್ರವಾಗಿಲ್ಲ. ಆದರೆ ಇದು ಕಲಿಕೆಯ ಉತ್ಸಾಹ ಮತ್ತು ಆಚರಣೆಯಲ್ಲಿ ಸಮನ್ವಯ ದೃಷ್ಟಿಕೋನವನ್ನು ಹೊಂದಿದ, ಬಹುಮುಖಿ ಸಾಮರ್ಥ್ಯವನ್ನು ಒಳಗೊಂಡ ತರಗತಿ ಕೋಣೆಗಳನ್ನು ಬೇಡುವ ವಿಶೇಷ ಅಗತ್ಯಗಳ ಒಂದು ಪರಿಚಯವಷ್ಟೇ.

ನಮ್ಮ ದೈನಂದಿನ ತರಗತಿಕೋಣೆಯ ಅಭ್ಯಾಸಗಳ ಪರಂಪರೆಯೇ ಆಗಿರುವ ಇತರ ಶೈಕ್ಷಣಿಕ ಅಗತ್ಯಗಳೂ ಇವೆ. ಕೋಲ್ಕತ್ತಾ ಮಹಾನಗರದ ಹೃದಯ ಭಾಗದಲ್ಲಿರುವ ಜೋಧ್‌ಪುರ್ ಪಾರ್ಕ್‌ನಲ್ಲಿನ ಒಂದು ತರಗತಿಯ ದೈನಂದಿನ ದಿನಚರಿಯೊಂದು ಹೀಗಿದೆ. ಅಲ್ಲಿ ಒಂದು ಭಾಷಾ ಪಾಠವು ನಡೆಯುತ್ತಿದ್ದು ಮಕ್ಕಳು ಬಾಂಗ್ಲಾ ಪ್ರಬಂಧವನ್ನು ಒಟ್ಟಾಗಿ ಓದುತ್ತಾರೆ. ಆದಾಗ್ಯೂ, ಹಲವು ಧ್ವನಿಗಳು ಒಟ್ಟಾಗಿ ಮಾಡುವ ಏರಿಳಿತದ ಲಯವು ಆ ಪಾಠದಲ್ಲಿ ಆ ಮಕ್ಕಳು

ಯಾಂತ್ರಿಕವಾಗಿ ತೊಡಗಿಕೊಂಡಿರುವರು ಎಂಬುದನ್ನು ಸೂಚಿಸುತ್ತದೆ. ಅದೇ ಪಠಣವು ನಗರದ ತರಗತಿ ಕೊಠಡಿಗಳ ಮೂಲಕ ಪ್ರತಿಧ್ವನಿಸುತ್ತದೆ ಮತ್ತು ಗ್ರಾಮೀಣ ಹೃದಯಭಾಗಗಳಲ್ಲಿ ಇನ್ನಷ್ಟು ಜೋರಾಗುತ್ತದೆ. ಇದು ಮತ್ತು ಇದೇ ರೀತಿಯ ಇತರ ದಿನಚರಿ ಅಭ್ಯಾಸಗಳು ನೀಡುವ ಸಂದೇಶವೆಂದರೆ, ಊಹಿಸಲಾಗದಷ್ಟು ದೊಡ್ಡ ಸಂಖ್ಯೆಯ ಮಕ್ಕಳು ಚೆನ್ನಾಗಿ ಓದಲು ಪ್ರಾರಂಭಿಸಿದರೂ ಮತ್ತು ಕಲಿಕೆಗೆ ಸಿದ್ಧರಾಗಿದ್ದರೂ ಕೂಡಾ ಅವರು ಓದುವಿಕೆ ಮತ್ತು ಬರವಣಿಗೆಯೊಂದಿಗೆ ಹೋರಾಡುತ್ತಿದ್ದಾರೆ. ೩ನೇ ತರಗತಿಯಲ್ಲಿ ತಮ್ಮ ಹೆಸರನ್ನು ಓದಲು ಸಹ ವಿಫಲರಾಗುವ, ೫ನೇ ತರಗತಿಯಲ್ಲಿ ಭಾಷಾ ಪರೀಕ್ಷೆಯ ಮೊದಲು ಪ್ರತಿ ವಾಕ್ಯವನ್ನು ಕಂಠಪಾಠ ಮಾಡುವ, ಮತ್ತು ೭ನೇ ತರಗತಿಯಲ್ಲಿ ಸಾಲುಗಳ ನಡುವೆ ಓದುವ ಸೂಕ್ಷ್ಮತೆಗಳನ್ನು ಕಳೆದುಕೊಳ್ಳುವ ಮಕ್ಕಳು ಇವರು. ಇವರು ಯಾವುದೇ ವಿಶೇಷ ಅಗತ್ಯಗಳಿಲ್ಲದೇ ತಮ್ಮ ಶಾಲಾ ಜೀವನವನ್ನು ಪ್ರಾರಂಭಿಸಿರಬಹುದು. ಆದರೆ ತಮ್ಮ ಪಠ್ಯಪುಸ್ತಕದ ಪುಟಗಳನ್ನು ತಿರುಗಿಸುವಾಗ ಪ್ರತಿ ಸಲವೂ ಸಂಚಿತ ಅನನುಕೂಲತೆಯನ್ನು, ತೊಂದರೆಯನ್ನು ಅನುಭವಿಸಿರುತ್ತಾರೆ.

ಅಗಾಧ ಸಂಖ್ಯೆಯ ಮಕ್ಕಳ ಅಂತಹ ಭಾಷಾ ಸಾಮರ್ಥ್ಯದ ಕುಂದಿದ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ನಾನು ಸಮನ್ವಯ ತರಗತಿಕೋಣೆಯ ಪರಿಕಲ್ಪನೆಯನ್ನು ವ್ಯಾಖ್ಯಾನಿಸಲು ಬಯಸುತ್ತೇನೆ: ಈ ಬಗೆಯ ತರಗತಿಯು, ಮಕ್ಕಳ ನಡುವಿನ ಎಲ್ಲಾ ಹಂತದ ವೈಯಕ್ತಿಕ ವ್ಯತ್ಯಾಸಗಳು, ಅವರ ವೈದ್ಯಕೀಯ ಅಥವಾ ಶೈಕ್ಷಣಿಕ ಇತಿಹಾಸಗಳು ಯಾವುದರಿಂದಲಾದರೂ ಕೂಡಿರಲಿ, ಅದನ್ನು ಬೆಂಬಲಿಸುವ ಬೋಧನಾ-ಕಲಿಕಾ ವಾತಾವರಣವಾಗಿರುತ್ತದೆ.

ಬದಲಾವಣೆಗಳಿಗೆ ಸ್ಪಂದಿಸುತ್ತಾ

ಭಾಷಾ ಚಟುವಟಿಕೆಗಳಲ್ಲಿ ಮಗುವಿನ ಕಾರ್ಯಕ್ಷಮತೆಗೆ ವಿವಿಧ ಬಗೆಯ ಸಂಜ್ಞಾನಾತ್ಮಕ ಪ್ರಕ್ರಿಯೆಗಳು ಕೊಡುಗೆ ನೀಡುತ್ತವೆ. ಈ ಸಂಜ್ಞಾನಾತ್ಮಕ ಪ್ರಕ್ರಿಯೆಗಳನ್ನು ತರಗತಿಯಲ್ಲಿ ತಂತಾನೆ ಪ್ರಸ್ತುತಪಡಿಸಿಕೊಳ್ಳುವ ಮೆದುಳಿನ ಹಾರ್ಡ್-ವೈರಿಂಗ್ ಮಾರ್ಗಗಳಂತೆ ನೋಡಬಹುದು. ಈ ಸಂಜ್ಞಾನಾತ್ಮಕ ಪ್ರಕ್ರಿಯೆಗಳು ಸಂಕೀರ್ಣ ಮೆದುಳಿನ ಕಾರ್ಯಗಳನ್ನು ದೈನಂದಿನ ಭಾಷಾ ಅಭಿವ್ಯಕ್ತಿಯಾಗಿ ಪರಿವರ್ತಿಸುತ್ತವೆ. ಅಂದರೆ, ಕವನ ವಾಚನ ಮತ್ತು ಉಕ್ತಲೇಖನ ಪರೀಕ್ಷೆಗಳಿಂದ ಕಥೆ ಬರವಣಿಗೆ ಮತ್ತು ಪುಸ್ತಕ ವಿಮರ್ಶೆಗಳಿಗೆ ಪರಿವರ್ತಿಸುತ್ತವೆ. ಇಂತಹ ಸಂಜ್ಞಾನಾತ್ಮಕ ಪ್ರಕ್ರಿಯೆಗಳ ಅಗತ್ಯವಿರುವ ಕೆಲಸಗಳಲ್ಲಿ ತೊಡಗಿರುವ ಮಕ್ಕಳನ್ನು ಸಾಕಷ್ಟು ಸಂಖ್ಯೆಯಲ್ಲಿ ನಾವು ಮೌಲ್ಯಮಾಪನ ಮಾಡಿದರೂ ಸಾಮಾನ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಒಂದು ದೊಡ್ಡ ಗುಂಪನ್ನು ಕಾಣುತ್ತೇವೆ. ಅವರೊಂದಿಗೆ ಅಸಾಧಾರಣವಾಗಿ ಉತ್ತಮರಾಗಿರುವ ಕೆಲವರು ಮತ್ತು ಅಸಾಧಾರಣವಾಗಿ ಕಳಪೆಯಾಗಿರುವ ಕೆಲವರು ಸಹ ಇರುತ್ತಾರೆ. ಈ ಸಂಜ್ಞಾನಾತ್ಮಕ ಪ್ರಕ್ರಿಯೆಗಳ ಅಭಿವ್ಯಕ್ತಿಯನ್ನು ಒಂದು ಅವಿಚ್ಛಿನ್ನ ಸರಣಿಯಲ್ಲಿ ಇಟ್ಟು ನೋಡಿದಾಗ ಗೊತ್ತಾಗುವುದೇನೆಂದರೆ, ವಿಶೇಷ ಶೈಕ್ಷಣಿಕ ಬೆಂಬಲಕ್ಕೆ ಮಗುವಿನ ರೋಗನಿರ್ಣಯವನ್ನು ನಿಯೋಜಿಸುವುದು ಆರಂಭಿಕ ಹಂತವಾಗುವುದಿಲ್ಲ, ಬದಲಿಗೆ, ಕೌಶಲ್ಯದ ಅವಿಚ್ಛಿನ್ನ ಸರಣಿಯಲ್ಲಿ ಅಳತೆಯಿಂದ ಕೆಳಗೆ ಜಾರಿದ ಯಾವುದೇ ಮಗುವಿನ ಬಗ್ಗೆ ಹೆಚ್ಚಿನ ಕಾಳಜಿ ವಹಿಸಬೇಕು ಎಂದರ್ಥ.

ವೈದ್ಯಶಾಸ್ತ್ರೀಯವಾಗಿ ಕಾಯಿಲೆಯನ್ನು ನಿರ್ಣಯಿಸಿದ ಮಕ್ಕಳು ಕೆಲವು ನಿರ್ದಿಷ್ಟ ಸಂಜ್ಞಾನಾತ್ಮಕ ಪ್ರಕ್ರಿಯೆಗಳಲ್ಲಿ ಕೊರತೆಯನ್ನು ಹೊಂದಿರುತ್ತಾರೆ. ಉದಾಹರಣೆಗೆ, ಡಿಸ್ಲೆಕ್ಸಿಯಾ ಹೊಂದಿರುವ ಮಕ್ಕಳು ಭಾಷೆಯಲ್ಲಿನ ಧ್ವನಿಗಳನ್ನು ಗುರುತಿಸಲು ಮತ್ತು ಅದರೊಂದಿಗೆ ಆಟವಾಡಲು ತೀವ್ರ ತೊಂದರೆಗಳನ್ನು ಅನುಭವಿಸುತ್ತಾರೆ. ಇದು ಶಬ್ದಗಳನ್ನು ಅಕ್ಷರಗಳಿಗೆ ಮತ್ತು ಕಾಗುಣಿತಕ್ಕೆ ಹೊಂದಿಸಲು ಅವರು ಹೆಣಗಾಡುವಂತೆ ಮಾಡುತ್ತದೆ ಮತ್ತು ಪ್ರತಿಯಾಗಿ, ಓದುವಾಗ ಮತ್ತು ಉಚ್ಚಾರಣೆ ಮಾಡುವಾಗ ಪುನರಾವರ್ತಿತ ತಪ್ಪುಗಳನ್ನು ಉಂಟುಮಾಡುತ್ತದೆ. ಭಾಷೆಯ

ವ್ಯಾಕರಣಕ್ಕೆ ಸಂಬಂಧಿಸಿದ ಸಂಜ್ಞಾನಾತ್ಮಕ ಪ್ರಕ್ರಿಯೆಗಳು ದುರ್ಬಲವಾಗಿರುವುದು ಮತ್ತು ಜಗತ್ತನ್ನು ಪದನಾಮಗಳೊಂದಿಗೆ ಹೊಂದಿಸಲು ಅಗತ್ಯವಿರುವ ಶಬ್ದಕೋಶವನ್ನು ದಕ್ಕಿಸಿಕೊಳ್ಳುವುದು ಕಷ್ಟವಾಗುವುದು ಇವೆಲ್ಲ ಸ್ಪೆಸಿಫಿಕ್ ಲ್ಯಾಂಗ್ವೇಜ್ ಇಂಪೇರ್‌ಮೆಂಟ್ ಹೊಂದಿರುವ ಮಕ್ಕಳ ವೈಶಿಷ್ಟ್ಯಗಳನ್ನು ವ್ಯಾಖ್ಯಾನಿಸುತ್ತವೆ. ಈ ವಿಶಾಲ ಭಾಷಾ ಕೌಶಲ್ಯಗಳಲ್ಲಿನ ದೌರ್ಬಲ್ಯವು ಮಕ್ಕಳು ಕೇಳುವಾಗ ಮತ್ತು ಓದುವಾಗ ಅವರ ಗ್ರಹಿಕೆ ಕಳಪೆಯಾಗುವಂತೆ ಮಾಡುತ್ತದೆ. ಅಟೆನ್ಶನ್ ಡಿಫಿಸಿಟ್ ಡಿಸಾರ್ಡರ್ ಇರುವ (ಎಡಿಡಿ) ಮಕ್ಕಳ ಭಾಷಾ ಕಲಿಕೆಯ ಸಮಯದಲ್ಲಿ ಮತ್ತೊಂದು ವಿಧದ ಸಂಜ್ಞಾನಾತ್ಮಕ ಪ್ರಕ್ರಿಯೆ ಇರುವುದಲ್ಲ. ಅಸ್ವಸ್ಥತೆಯ ಹೆಸರೇ ಸೂಚಿಸುವಂತೆ ಎಡಿಡಿ ಯೊಂದಿಗಿನ ಮಗುವಿಗೆ ಗಮನವನ್ನು ಕೇಂದ್ರಿಕರಿಸುವಲ್ಲಿ ತೀವ್ರ ತೊಂದರೆ ಇರುತ್ತದೆ. ಇದು ಕಲಿಕೆಯಲ್ಲಿ ಏಕಾಗ್ರತೆಯನ್ನು ಕೇಂದ್ರೀಕರಿಸುವ ಅಸಮರ್ಥತೆಯನ್ನು ಮಾತ್ರ ಸೂಚಿಸುವುದಿಲ್ಲ. ಬದಲಿಗೆ ಯಾವುದೇ ರೀತಿಯ ಅಡಚಣೆಗಳಿದ್ದಾಗ ಗಮನವನ್ನು ಕೇಂದ್ರೀಕರಿಸಲು ಅಗತ್ಯವಿರುವ ನಿಯಂತ್ರಣದಲ್ಲಿನ ಕೊರತೆಯನ್ನು ಸಹ ಸೂಚಿಸುತ್ತದೆ. ಅಂತಹ ತೊಂದರೆಯೊಂದಿಗೆ, ಎಡಿಡಿ ಹೊಂದಿರುವ ಮಗು ಡಿಸ್ಲೆಕ್ಸಿಯಾ ಹೊಂದಿರುವ ಮಗುವಿಗಿಂತ ಉತ್ತಮವಾಗಿ ಓದಲು ಮತ್ತು ಉಚ್ಚರಿಸಲು ಕಲಿಯಬಹುದು ಮತ್ತು ಎಸ್‌ಎಲ್‌ಐ ಹೊಂದಿರುವ ಮಗುವಿಗಿಂತ ಉತ್ತಮವಾಗಿ ಗ್ರಹಿಸಬಹುದು. ಆದರೆ ಭಾಷೆಯ ಕೆಲಸವನ್ನು ಮೇಲ್ವಿಚಾರಣೆ ಮಾಡುವಲ್ಲಿನ ಏರಿಳಿತಗಳ ಕಾರಣದಿಂದಾಗಿ ಇನ್ನೂ ಹೆಚ್ಚಿನ ತಪ್ಪುಗಳನ್ನು ಮಾಡಬಹುದು.

ವೈದ್ಯಕೀಯ ಸ್ಥಿತಿಗಳ ಈ ಸಂಕ್ಷಿಪ್ತ ಚಿತ್ರಣವು ಭಾಷಾ ಕಲಿಕೆಯಲ್ಲಿ ಯಾವ ಬಗೆಯ ಸಂಜ್ಞಾನಾತ್ಮಕ ಪ್ರಕ್ರಿಯೆಗಳ ಸಂಗ್ರಹ ಬೇಕಾಗುತ್ತದೆ ಎನ್ನುವುದನ್ನು, ಮತ್ತು ಈ ಪ್ರದೇಶಗಳಲ್ಲಿ ಯಾವುದಾದರೂ ಒಂದು ದುರ್ಬಲvಯು ಕಲಿಕೆಯನ್ನು ಹೇಗೆ ನಿಧಾನAಗೊಳಿಸಬಹುದು ಎಂಬುದನ್ನು ತೋರಿಸುತ್ತದೆ. ಆದಾಗ್ಯೂ, ಈ ಚಿತ್ರಣಗಳು ಸಾಕಷ್ಟು ಅಪರೂಪದ "ಶುದ್ಧ" ಪ್ರಕರಣಗಳಾಗಿವೆ. ತೊಂದರೆಗಳನ್ನು ಹೊಂದಿರುವ ಅನೇಕ ಮಕ್ಕಳು ರೋಗನಿರ್ಣಯದ ವರ್ಗೀಕರಣಗಳನ್ನು ಗೊಂದಲಗೊಳಿಸುವ ರೀತಿಯಲ್ಲಿ ದೌರ್ಬಲ್ಯಗಳ ವ್ಯಕ್ತಿತ್ವ ಚಿತ್ರಣವನ್ನು ಹೊಂದಿರುತ್ತಾರೆ. ಒಂದು ಸಮನ್ವಯ ತರಗತಿ ಕೋಣೆಯು ಎಲ್ಲಾ ಕೌಶಲ್ಯಗಳಿಗೆ ತಕ್ಕ ಪ್ರಚೋದನೆ ಮತ್ತು ನೆರವು ಅಗತ್ಯವಿರುವ ಕಲಿಕಾರ್ಥಿಗಳಂತೆ ಮಕ್ಕಳನ್ನು ಪರಿಗಣಿಸುವ ಒಂದು ದೃಷ್ಟಿಕೋನವನ್ನು ಹೊಂದಿದ್ದರೆ ಉತ್ತಮವೆಂಬುದು ಇದರಿಂದ ತಿಳಿಯುತ್ತದೆ.

ವೈದ್ಯಶಾಸ್ತ್ರೀಯವಾಗಿ ರೋಗನಿರ್ಣಯವಾದ ಕೆಲವು ಮಕ್ಕಳಿಗೆ ಖಂಡಿತವಾಗಿಯೂ ತೀವ್ರವಾದ ಬೆಂಬಲ ಬೇಕಾಗುತ್ತದೆ. ಅಂತಹ ವೈಯಕ್ತಿಕ ಬೆಂಬಲವನ್ನು ಸಂಪನ್ಮೂಲ ಕೊಠಡಿ ಅಥವಾ ಸಹಾಯಕ ಕಲಿಕೆ ವಿಭಾಗದಲ್ಲಿ 'ಪುಲ್-ಔಟ್' ಪ್ರೋಗ್ರಾಂ (ವಿಶೇಷ ಮಗುವನ್ನು ದಿನನಿತ್ಯದ ತರಗತಿ ವಾತಾವರಣದಿಂದ ವಾರದ ಒಂದೆರಡು ಗಂಟೆ ಹೊರಗಿನ ವಾತಾವರಣಕ್ಕೆ ಕರೆದೊಯ್ಯುವ ಕಾರ್ಯಕ್ರಮ) ಮೂಲಕ ಉತ್ತಮವಾಗಿ ನೀಡಲಾಗುತ್ತದೆ. ಆದರೆ ಶಾಲೆಯಲ್ಲಿ ಪುಲ್-ಔಟ್ ಪ್ರೋಗ್ರಾಂ ಅನ್ನು ಸ್ಥಾಪಿಸುವುದರಿಂದ ಅದು ಸಮನ್ವಯ ತರಗತಿ ಕೋಣೆಯ ಅಗತ್ಯವನ್ನು ಯಾವುದೇ ರೀತಿಯಲ್ಲಿ ಕಡಿಮೆ ಮಾಡುವುದಿಲ್ಲ. ಏಕೆಂದರೆ ವಿಭಿನ್ನ ಸಾಮರ್ಥ್ಯವಿರುವ ಮಕ್ಕಳಿಂದ ತುಂಬಿರುವ ತರಗತಿಯಲ್ಲಿ ಮಾತ್ರ ಹೊಸ ಕೌಶಲ್ಯಗಳು ಮತ್ತು ನಿಭಾಯಿಸುವ ವಿಧಾನಗಳನ್ನು ಅಭ್ಯಾಸ ಮಾಡಬಹುದು. ಆದಾಗ್ಯೂ, ಸಮನ್ವಯ ತರಗತಿ ಕೋಣೆಯು ಮಕ್ಕಳ ದುರ್ಬಲ ಕೌಶಲ್ಯಗಳನ್ನು ಬಲಪಡಿಸುವ ಅವಕಾಶವನ್ನು ಹೊಂದಿರುವ ಮತ್ತೊಂದು ಸ್ಥಳದಂತೆ ಅಲ್ಲ. ಮಗುವೊಂದು ಕಲಿಕಾ ಕೊರತೆಗಳನ್ನು ಹೊಂದಿದ ಒಂದು ಕಣಜ ಎಂಬಂತೆ ನೋಡದೇ ಆ ಮಗುವನ್ನು ಇಡಿಯಾಗಿ ಪೋಷಿಸುವ ಏಕೈಕ ಮಾರ್ಗವೆಂದರೆ ಅದು ಸಮನ್ವಯ ತರಗತಿ ಕೋಣೆಯಾಗಿದೆ.

ಅಭ್ಯಾಸವು ಸಹಾಯ ಮಾಡುತ್ತದೆ, ವೈವಿಧ್ಯತೆಯು ಇನ್ನೂ ಹೆಚ್ಚು ಸಹಾಯ ಮಾಡುತ್ತದೆ

ದಶಕಗಳ ನರವಿಜ್ಞಾನ ಸಂಶೋಧನೆಯಿಂದ ಸಾಕಷ್ಟು ಸ್ಪಷ್ಟವಾಗಿ ಕಂಡುಬರುವ ಸಂಗತಿಯೆಂದರೆ, ಹೊಸ ಕಲಿಕೆಯ ಅನೇಕ ಸಂಜ್ಞಾನಾತ್ಮಕ ಮಾರ್ಗಗಳು ಬೋಧನೆಗೆ ಸ್ಪಂದಿಸುತ್ತವೆ. ಅದು ಹೊಸ ಕಲಿಕೆಯು ಕಾಗುಣಿತಗಳನ್ನು ಡಿಕೋಡಿಂಗ್ ಮಾಡುವುದಿರಬಹುದು, ಹೊಸ ಪದ ರೂಪಗಳ ನಿಯಮಗಳನ್ನು ರೂಪಿಸುವುದಿರಬಹುದು ಅಥವಾ ಅನಿರೀಕ್ಷಿತವಾಗಿ ಸಂಕೀರ್ಣವಾದ ವಾಕ್ಯವೃಂದಗಳಿಂದ ತೀರ್ಮಾನಗಳನ್ನು ರೂಪಿಸುವುದಿರಬಹುದು. ಈ ಹೊಸ ಸನ್ನಿವೇಶಗಳನ್ನು ಹೇಗೆ ಕರಗತ ಮಾಡಬಹುದು ಎಂಬುದಕ್ಕೆ ಹಲವಾರು ವಿಧಾನಗಳಿದ್ದರೂ, ಅಭ್ಯಾಸವು ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎನ್ನುವುದರ ಬಗೆಗೆ ಮಧ್ಯಸ್ಥಿಕೆಯ ಸಂಶೋಧನೆಯು ಒಮ್ಮತವನ್ನು ಹೊಂದಿದೆ. ಆದಾಗ್ಯೂ, ಅಭ್ಯಾಸ ನಡೆಸುವುದನ್ನು ಯಾಂತ್ರಿಕವಾದ, ಪುನರಾವರ್ತಿತ ಅಭ್ಯಾಸಗಳೊಂದಿಗೆ ಸಮೀಕರಿಸಿದಾಗ ಈ ಸರಳ ಸೂತ್ರದ ಪ್ರಯೋಜನಗಳನ್ನು ನಾವು ಕಳೆದುಕೊಳ್ಳಬಹುದು. ಒಂದು ಪದವನ್ನು ೨೫ ಬಾರಿ ಬರೆಯುವ ಮೂಲಕ ಮಕ್ಕಳಿಗೆ ಕಾಗುಣಿತವನ್ನು ಕಲಿಯಲು ಹೇಳುವುದು ಅಭ್ಯಾಸ ದಾರಿ ತಪ್ಪಿದ್ದರ ಒಂದು ಉದಾಹರಣೆಯಾಗಿದೆ. ಇದರಿಂದ ಕೃತಕ ದಿನಚರಿಗಳಿಗೆ ಕೆಲವು ಲಾಭಗಳಿವೆಯಾದರೂ ದೀರ್ಘಾವಧಿಯಲ್ಲಿ, ಇವು ಭಾಷೆಯನ್ನು ಅನ್ವೇಷಿಸುವ ಮತ್ತು ಅದರೊಂದಿಗೆ ಆಡುವ ಮಗುವಿನ ಸ್ವಾಭಾವಿಕ ಬಯಕೆಯನ್ನು ಚಿವುಟಿ ಹಾಕುತ್ತವೆ. ಹೊಸತನ್ನು ಅನ್ವೇಷಿಸುವ ಶಿಕ್ಷಕರು ಅಭ್ಯಾಸವನ್ನು ಆಯ್ದುಕೊಂಡು, ವೈವಿಧ್ಯತೆಯೊಳಗೆ ಅಭ್ಯಾಸವನ್ನು ಅಳವಡಿಸಿಕೊಂಡಾಗ ಮಾತ್ರ ಸಮತೋಲನವನ್ನು ಕಾಯ್ದುಕೊಳ್ಳಬಹುದು.

ಹಾಗಾಗಿ, ಸಮನ್ವಯ ಭಾಷಾ ತರಗತಿಯು ಮಕ್ಕಳು ಭಾಷಾ ಕಲಿಕೆಯ ಕೆಲಸಕ್ಕೆ ತಮ್ಮೊಂದಿಗೆ ತರುವ ಬಲಗಳು ಮತ್ತು ತೊಡಕುಗಳನ್ನು ಒಡಗೂಡಿದ ಒಂದು ಬೋಧನಾ ವಾತಾವರಣವಾಗಿದೆ. ಆದರೆ ಅಷ್ಟೇ ಮುಖ್ಯವಾಗಿ, ಮಾಡುತ್ತಿರುವ ಕೆಲಸಕ್ಕೆ ಸಂಬಂಧಿಸಿದಂತೆ ಮಗುವಿನ ಭಾವನೆಗಳು ಮತ್ತು ಪ್ರೇರಣೆಗಳು ಏನಿವೆಯೋ ಅವುಗಳೊಂದಿಗೂ ಅದು ಹೊಂದಿಕೊಳ್ಳುತ್ತದೆ.

ಒಳಗೊಂಡು ಮಾಡುವ ಕೆಲಸಗಳು

ಸಮನ್ವಯ ತರಗತಿ ಕೋಣೆಯು ತನ್ನ ರಚನೆಯಲ್ಲಿ ನಮ್ಯತೆಯನ್ನು (ಫ್ಲೆಕ್ಸಿಬಿಲಿಟಿ) ಹೊಂದಿದೆ. ಈ ತರಗತಿ ಕೊಠಡಿಗಳು ಎಲ್ಲಾ ಮಕ್ಕಳು ಮುಚ್ಚಿದ, ಪೂರ್ವ-ನಿಗದಿತ ಯೋಜನೆಗೆ ಹೊಂದಿಕೊಳ್ಳಬೇಕು ಎಂಬ ಬೇಡಿಕೆಗಿಂತ ಹೆಚ್ಚಾಗಿ ಕ್ರಿಯೆಯಲ್ಲಿ ಮುಕ್ತತೆಯನ್ನು ತೋರಿಸುತ್ತವೆ. ಒಂದು ತರಗತಿಯನ್ನು ಸಮನ್ವಯ ತರಗತಿಕೋಣೆಯನ್ನಾಗಿ ಮಾರ್ಪಡಿಸುವುದಾದರೆ ಕೆಳಗಿನ ಮೂರು ಕ್ಷೇತ್ರಗಳಲ್ಲಿನ ಮುಕ್ತತೆಯು ಅತ್ಯವಶ್ಯ.

೧. ಪ್ರತಿ ಮಗುವಿಗೂ ಸರಿಯಾದ ವರ್ಕ್‌ಶೀಟ್ ನೀಡುವಿಕೆ

ನಿರ್ದಿಷ್ಟ ವಿಷಯದ ಕುರಿತು ನಿಮ್ಮ ಪಾಠಗಳನ್ನು ಯೋಜಿಸುವಾಗ, ಹೆಚ್ಚುವರಿ ಕೆಲಸ ಮಾಡಿ ಹಲವು ಬಗೆಯ ವರ್ಕ್‌ಶೀಟ್‌ಗಳನ್ನು ತಯಾರು ಮಾಡಿ. ವರ್ಕ್‌ಶೀಟ್‌ನಲ್ಲಿ ಹೆಚ್ಚುವರಿ ಪ್ರಶ್ನೆಗಳನ್ನು ಪರಿಚಯಿಸುವುದರಿಂದ ಗುಂಪಿನಲ್ಲಿ ಉಳಿದವರಿಗಿಂತ ವೇಗವಾಗಿರುವ ವಿದ್ಯಾರ್ಥಿಗಳಿಗೆ ಸವಾಲು ಹಾಕಬಹುದು. ರೇಖಾಚಿತ್ರಗಳು, ಫ್ಲೋಚಾರ್ಟ್‌ಗಳು ಮತ್ತು ಮೈಂಡ್-ಮ್ಯಾಪ್‌ಗಳ ಮೂಲಕ ಮಾಹಿತಿಯನ್ನು ನೀಡುವ ಸಚಿತ್ರ ವರ್ಕ್‌ಶೀಟ್‌ಗಳ ಮೂಲಕ ಕೊಟ್ಟಿರುವ ವಾಕ್ಯಗಳಲ್ಲಿನ ಅಂಶಗಳನ್ನು ಒಂದಕ್ಕೊಂದು ಹೊಂದಿಸಲು ಕಷ್ಟಪಡುವ ಮಕ್ಕಳ ಗೊಂದಲವನ್ನು ಕಡಿಮೆ

ಮಾಡಬಹುದು. ಬುಲೆಟ್ ಪಾಯಿಂಟ್‌ಗಳಲ್ಲಿ ಮಾಹಿತಿಯನ್ನು ನೀಡುವ ವರ್ಕ್ಶೀಟ್‌ಗಳು ಸುದೀರ್ಘ ಪ್ಯಾರಾಗಳನ್ನು ಓದಲು ಕಷ್ಟಪಡುವ ಮಕ್ಕಳಿಗೆ ಸಹಾಯಕವಾಗಿವೆ.

೧. ಪ್ರತಿ ಮಗುವಿಗೆ ಸರಿಯಾದ ಮನೆಗೆಲಸ (ಹೋಮ್‌ವರ್ಕ್) ನೀಡುವಿಕೆ

ವಿಶೇಷ ಅಗತ್ಯವಿರುವ ಮಕ್ಕಳು ಸಾಮಾನ್ಯವಾಗಿ ಇತರ ಮಕ್ಕಳಿಗಿಂತ ಹೆಚ್ಚು ಗಂಟೆಗಳ ಕಾಲ ಕೆಲಸ ಮಾಡುತ್ತಾರೆ. ತರಗತಿಯ ಕೆಲಸವನ್ನು ಮುಗಿಸಲು ಅವರಿಗೆ ಹೆಚ್ಚು ಸಮಯ ಬೇಕಾಗುತ್ತದೆ. ಮನೆಗೆ ಕಳುಹಿಸಿದ ಕೆಲಸವನ್ನು ಪೂರ್ಣಗೊಳಿಸಲು ಸಹ ಅವರಿಗೆ ಹೆಚ್ಚಿನ ಸಮಯ ಬೇಕಾಗುತ್ತದೆ. ಆದ್ದರಿಂದ ಸ್ವಲ್ಪ ಕಾಲದ ನಂತರ ಆ ಮಗುವಿಗೆ ಬಹಳ ಕಡಿಮೆ ವಿರಾಮದ ಸಮಯ ಉಳಿದಿರುತ್ತದೆ. ಮನೆಯಲ್ಲಿ ಮಾಡಲು ಕೊಟ್ಟ ಅಭ್ಯಾಸದ ಕೆಲಸಗಳು ಮಗುವಿನ ಕೆಲಸದ ವೇಗಕ್ಕೆ ಹೊಂದಿಕೆಯಾಗುವಂತೆ ಇದೆ ಎಂದು ಖಚಿತಪಡಿಸಿಕೊಳ್ಳುವ ಮೂಲಕ ಶಿಕ್ಷಕರು ಅಂತಹ ಮಕ್ಕಳಿಗೆ ಸಹಾಯ ಮಾಡಬಹುದು. ಶಿಕ್ಷಕರು ಮಕ್ಕಳ ಕೆಲಸವನ್ನು ಈ ರೀತಿ ಮೇಲ್ವಿಚಾರಣೆ ಮಾಡಿದಾಗ, ಕೆಲವು ಮಕ್ಕಳಿಗೆ ಇತರರಿಗಿಂತ ಕಡಿಮೆ ಮನೆಕೆಲಸ ಇರುತ್ತದೆ.

೩. ಪ್ರತಿ ಮಗುವಿಗೆ ಸರಿಯಾದ ಪರೀಕ್ಷೆ ನೀಡುವಿಕೆ

ಲಿಖಿತ ಪರೀಕ್ಷೆಗಳು ಮೌಲ್ಯಮಾಪನದ ಏಕೈಕ ವಿಧಾನವಾಗಿದ್ದಾಗ ಎಲ್ಲಾ ಮಕ್ಕಳು ತಮ್ಮ ಕಲಿಕೆಯನ್ನು ಪ್ರದರ್ಶಿಸಲು ಸಾಧ್ಯವಾಗುವುದಿಲ್ಲ. ಕೆಲವು ಮಕ್ಕಳು ಮೌಖಿಕ ಪರೀಕ್ಷೆಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸಬಹುದು. ಕೆಲವು ಮಕ್ಕಳು ವೇಗದ ಒತ್ತಡದಲ್ಲಿ ಕಳಪೆಯಾಗಿ ಕಾರ್ಯನಿರ್ವಹಿಸುತ್ತಾರೆ. ಆದರೆ ಪರೀಕ್ಷೆಯನ್ನು ಸಮಯ-ಮುಕ್ತ ಗೊಳಿಸಿದಾಗ ಅವರು ಉತ್ತಮ ಅಂಕಗಳನ್ನು ಗಳಿಸುತ್ತಾರೆ. ವಿವಿಧ ಪರೀಕ್ಷಾ ಸಂದರ್ಭಗಳಿಗಾಗಿ ಮೌಲ್ಯಮಾಪನಗಳು ಮಗುವಿನ ವ್ಯಕ್ತಿಗತ ಸಾಮರ್ಥ್ಯ ಮತ್ತು ದೌರ್ಬಲ್ಯಗಳಿಗೆ ಸೂಕ್ಷ್ಮವಾಗಿರುತ್ತವೆ. ಮಕ್ಕಳ ಕೆಲಸದ ಪೋರ್ಟ್ಫೋಲಿಯೋವನ್ನು ಅಭಿವೃದ್ಧಿಪಡಿಸುವ ಮೂಲಕ ಶಿಕ್ಷಕರು ಅವರ ಕಲಿಕೆಯನ್ನು ತೋರಿಸಲು ಮಕ್ಕಳಿಗೆ ಹೆಚ್ಚಿನ ಅವಕಾಶಗಳನ್ನು ನೀಡಬಹುದು. ಒಂದು ಪೋರ್ಟ್ಫೋಲಿಯೋ ಸ್ವಯಂ-ಗತಿಯ ಕಾರ್ಯಗಳು ಮತ್ತು ಸಮಯಮಿತಿಯ ಸಂದರ್ಭಗಳಲ್ಲಿ ಮಕ್ಕಳ ಲಿಖಿತ ಮತ್ತು ಮೌಖಿಕ ಪರೀಕ್ಷೆಗಳಲ್ಲಿನ ಕಾರ್ಯಕ್ಷಮತೆಯನ್ನೂ; ಸಂಶೋಧನೆ- ಆಧಾರಿತ ಕೆಲಸ ಮತ್ತು ಪ್ರಾಯೋಗಿಕವಾಗಿ ಅನುಭವ ಪಡೆದುಕೊಳ್ಳುವ ಕೆಲಸವನ್ನೂ ತಾಳೆ ನೋಡುತ್ತದೆ.

ಸಂಜ್ಞಾನಾತ್ಮಕ ನರವಿಜ್ಞಾನದಲ್ಲಿ ಆಸಕ್ತಿ ಹೊಂದಿರುವ ಸೋನಾಲಿ ನಾಗ್, ಕ್ಲಿನಿಕಲ್ ಸೈಕಾಲಜಿಸ್ಟ್ ಆಗಿದ್ದಾರೆ. ಅವರು ಬೆಂಗಳೂರಿನ ದಿ ಪ್ರಾಮಿಸ್ ಫೌಂಡೇಶನ್‌ನ ಸಹಾಯಕ ನಿರ್ದೇಶಕರಾಗಿದ್ದಾರೆ ಮತ್ತು ಸೆಂಟರ್ ಫಾರ್ ರೀಡಿಂಗ್ ಅಂಡ್ ಲ್ಯಾಂಗ್ವೇಜ್ ಮತ್ತು ರಿಸರ್ಚ್, ಯಾರ್ಕ್ ವಿಶ್ವವಿದ್ಯಾಲಯ, ಯು.ಕೆನಲ್ಲಿ ಸಂಶೋಧನಾ ವಿದ್ಯಾರ್ಥಿನಿಯಾಗಿದ್ದಾರೆ. ಅವರನ್ನು sonalinag@t-p-f.orgನಲ್ಲಿ ಸಂಪರ್ಕಿಸಬಹುದು.